ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಗುರುವಾರ, ದಿನಾಂಕ : 24 ನೇ ಸೆಪ್ಟೆಂಬರ್, 2020

ಬೆಂಗಳೂರಿನಲ್ಲಿ ಹೆಚ್ಚುತ್ತಿರುವ ಟ್ರಾಫಿಕ್ ಸಮಸ್ಯೆ ಕುರಿತು

ಶ್ರೀ ಹೆಚ್. ಎಂ. ರಮೇಶಗೌಡ(ವಿಧಾನಸಭೆಯಿಂದ ಚುನಾಯಿತರಾದವರು) –

60 (475) ಗೃಹ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಬೆಂಗಳೂರು ನಗರದಲ್ಲಿ ದಿನೇ ದಿನೇ ಟ್ರಾಫಿಕ್ ಸಮಸ್ಯೆ ಹೆಚ್ಚಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದರೆ, ಟ್ರಾಫಿಕ್ ನಿಯಂತ್ರಣಕ್ಕೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ;

(ಆ) ಸದ್ಯ ಟ್ರಾಫಿಕ್ ವಿಭಾಗದಲ್ಲಿ ಮೂರು ವಲಯಗಳು ಮಾತ್ರವಿದ್ದು, ನಾಲ್ಕನೇ ಹೊಸ ವಲಯ (ದಕ್ಷಿಣ ವಲಯ) ಮಾಡಲು ಸರ್ಕಾರ ಚಿಂತನೆ ನಡೆಸಿದೆಯೇ;

(ಇ) ನಗರದ ಅನಿರೀಕ್ಷಿತ ತಿರುವುಗಳಲ್ಲಿ ಟ್ರಾಫಿಕ್ ಪೊಲೀಸರು ಏಕಾಏಕಿ ಅಡ್ಡ ಬಂದು ವಾಹನ ಸವಾರರ ಅಪಘಾತಗಳಿಗೆ ಕಾರಣವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಯಾವ ಕ್ರಮ ಕೈಗೊಂಡಿದೆ;

(ಈ) ಟ್ರಾಫಿಕ್ ವಿಭಾಗದ ಸಿಬ್ಬಂದಿಗಳ ಕೊರತೆಯಿದ್ದು, ಸಿಬ್ಬಂದಿಗಳ ನಿಯೋಜನೆಗೆ ಸರ್ಕಾರ ಯಾವ ಕ್ರಮ ಕೈಗೊಳ್ಳಲಾಗಿದೆ; ಹೊಸ ಸಿಬ್ಬಂದಿಗಳ ನೇಮಕಾತಿ ಪ್ರಕ್ರಿಯೆ ಯಾವಾಗ ಆರಂಭವಾಗಲಿದೆ?